ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಮಂಗಳವಾರ, ದಿನಾಂಕ : 23ನೇ ಜುಲೈ, 2019

ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಉಪನ್ಯಾಸಕರ ನಿಯೋಜನೆ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ):-

496 (510) ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಉಪನ್ಯಾಸಕರನ್ನು ಅವರು ನೇಮಕಗೊಂಡ ಕಾಲೇಜುಗಳಿಂದ ಬೇರೆ ಕಡೆ ನಿಯೋಜಿಸುತ್ತಿರುವುದು ನಿಜವೇ;

(ಆ) ಹಾಗಿದ್ದಲ್ಲಿ, ಇಲ್ಲಿಯವರೆಗೆ ಎಷ್ಟು ಉಪನ್ಯಾಸಕರನ್ನು ನಿಯೋಜಿಸಲಾಗಿದೆ; (ಸಂಪೂರ್ಣವಾದ ವಿವರ ನೀಡುವುದು)

(ಇ) ಈ ರೀತಿ ನಿಯೋಜಿಸಲು ಶೈಕ್ಷಣಿಕ ಅಥವಾ ಆಡಳಿತಾತ್ಮಕ ಕಾರಣಗಳಿವೆಯೇ; (ಕಾರಣಗಳಿದ್ದಲ್ಲಿ ವಿವರ ನೀಡುವುದು)

(ಈ) ಈ ರೀತಿ ನಿಯೋಜನೆ ಮಾಡುವುದರಿಂದ ಅವರು ನೇಮಕಾತಿ ಹೊಂದಿದ ಕಾಲೇಜಿನಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ಆಗುತ್ತಿರುವ ಶೈಕ್ಷಣಿಕ ಹಿನ್ನಡೆ ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಬಂದಿದ್ದಲ್ಲಿ, ನಿಯೋಜನೆಯಿಂದ ಖಾಲಿಯಾದ ಉಪನ್ಯಾಸಕರ ವಿಷಯಗಳ ಬೋಧನೆಗೆ ಸರ್ಕಾರ ಪರ್ಯಾಯ ವ್ಯವಸ್ಥೆ ಮಾಡುತ್ತಿದೆಯೇ;

(ಊ) ಪರ್ಯಾಯ ವ್ಯವಸ್ಥೆ ಮಾಡದಿದ್ದಲ್ಲಿ ವಿದ್ಯಾರ್ಥಿಗಳ ಭವಿಷ್ಯಕ್ಕೆ ಕೊಡಲಿಪೆಟ್ಟು ಬಿದ್ದಂತಾಗುವುದಿಲ್ಲವೇ;

(ಋ) ನಿಯೋಜನೆ ವ್ಯವಸ್ಥೆಯನ್ನು ರದ್ದುಪಡಿಸುವ ಉದ್ದೇಶ ಸರ್ಕಾರಕ್ಕಿದೆಯೇ; ಇದ್ದಲ್ಲಿ, ಈ ಕುರಿತು ಸರ್ಕಾರ ಕೈಗೊಳ್ಳಲಿರುವ ಕ್ರಮಗಳೇನು?